ಡಿ. ಕೆ. ಕುಲಕರ್ಣಿ

# ಶಿವಮೊಗ್ಗ ಜಿಲ್ಲೆಯಲ್ಲಿ ರೈತರ ಸಂಘಟನೆ ಮತ್ತು ಚಳವಳಿಗಳು (೧೯೩೦–೧೯೮೦)

ಕರ್ನಾಟಕ ರೈತ ಚಳುವಳಿಯ ಇತಿಹಾಸದಲ್ಲಿ ಶಿವಮೊಗ್ಗ ಜಿಲ್ಲೆಗೆ ವಿಶೇಷ ಸ್ಥಾನವಿದೆ. ೧೯೩೦ ರಿಂದ ೧೯೮೦ರ ವರೆಗಿನ ಇತಿಹಾಸವನ್ನು ಪರಿಶೀಲಿಸಿದಾಗ ಶಿವಮೊಗ್ಗ ಜಿಲ್ಲೆ ಅನೇಕ ರೈತ ಸಂಘಟನೆಗಳನ್ನು ಸ್ಥಾಪಿಸಿ ರೈತ ಚಳವಳಿಗಳನ್ನು ಕರ್ನಾಟಕದಾದ್ಯಂತ ವಿಸ್ತರಿಸಲು ಕಾರಣವಾಗಿದೆ.

**ರೈತ ಚಳವಳಿಗಳು :** ಬ್ರಿಟಿಷರು ಭಾರತವನ್ನು ಆಕ್ರಮಿಸಿಕೊಳ್ಳುವಾಗ ಇತರ ಭಾಗಗಳಲ್ಲಿ ಆದಂತೆ ಶಿವಮೊಗ್ಗ ಜಿಲ್ಲೆಯಲ್ಲಿ ಕೂಡ ಕೆಲವೊಂದು ದಂಗೆಗಳಾದವು. ಈ ದಂಗೆಗಳು ಕೂಡ ಕಳೆದುಹೋದ ಅರಸರ ಅಧಿಕಾರವನ್ನು ತಿರುಗಿ ಪಡೆಯಲು ನಡೆದ ಮತ್ತು ವಿಪರೀತ ಕಂದಾಯುವೇರಿ ಅಧಿಕಾರಿಗಳ ಕಿರುಕುಳತನಕ್ಕೆ ಆದವು.[1] ಆದರೆ ಇವುಗಳು ರೈತರ ಸಮೂಹಕ್ಕೆ ಯಾವುದೇ ಲಾಭ ತರಲಿಲ್ಲ.

**ಕಾನೂನು ಭಂಗ ಮತ್ತು ಚಲೇಜಾವ್ ಚಳವಳಿ:** ೨೦ನೆಯ ಶತಮಾನದ ಆರಂಭದ ದಶಕದಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ರೈತರನ್ನು ತನ್ನ ಚಳವಳಿಗಳಲ್ಲಿ ಸೇರಿಸಿಕೊಳ್ಳತೊಡಗಿತು. ೧೯೩೦–೩೧ರಲ್ಲಿ ನಡೆದ ಕಾನೂನು ಭಂಗ ಚಳವಳಿ ಶಿವಮೊಗ್ಗ ಜಿಲ್ಲೆಯಲ್ಲಿ ಕೂಡ ಪ್ರಾರಂಭವಾಯಿತು. ಉತ್ತರಕನ್ನಡ ಮತ್ತು ಧಾರವಾಡ ಜಿಲ್ಲೆಗಳ ಚಳವಳಿಯಲ್ಲಿ ಆದ ಆಸ್ತಿಪಾಸ್ತಿ ಮುಟ್ಟುಗೋಲು ಮತ್ತು ಹರಾಜನ್ನು ಪ್ರತಿಭಟಿಸಿ, ಶಿವಮೊಗ್ಗ ಜಿಲ್ಲೆಯ ರೈತರು ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು. ಸೊರಬ ತಾಲೂಕಿನ ಹೆಚ್ಚೆ ಗ್ರಾಮದ ರೈತ ಮಹಿಳೆಯರು ಚಳವಳಿಯಲ್ಲಿ ಭಾಗ ವಹಿಸಿ, ಉತ್ತರಕನ್ನಡ ಮತ್ತು ಧಾರವಾಡ ಜಿಲ್ಲೆಗಳಲ್ಲಿ ವಶಪಡಿಸಿಕೊಂಡ ರೈತರ ಆಸ್ತಿಪಾಸ್ತಿಗಳನ್ನು ಹಿಂದಿರುಗಿಸ ಬೇಕೆಂದು ಒತ್ತಾಯಿಸಿದರು.[2] ಉತ್ತರಕನ್ನಡ ಮತ್ತು ಧಾರವಾಡ ಜಿಲ್ಲೆಗಳಂತೆ ಶಿವಮೊಗ್ಗ ಜಿಲ್ಲೆಯಲ್ಲಿ ಚಳವಳಿ ಅಷ್ಟೊಂದು ಉಗ್ರ ರೀತಿಯಲ್ಲಿ ಆಗದಿದ್ದರೂ ರೈತರಿಗೆ ಕಾಂಗ್ರೆಸ್ ಮತ್ತು ರಾಜಕೀಯದ ಬಗ್ಗೆ ಮಾಹಿತಿ ಮೂಡಿಸಿದಂತಾಯಿತು. ಅಲ್ಲದೆ ಶಿವಮೊಗ್ಗವು ರಾಜಕೀಯವಾಗಿ, ಮೈಸೂರು ಒಡೆಯರ ಸಂಸ್ಥಾನ ದಲ್ಲಿ ಇದ್ದುದರಿಂದ ಬ್ರಿಟಿಷರ ವಿರುದ್ಧ ಹೋರಾಡಲು ಅವರಿಗೆ ನೇರವಾದ ಕಾರಣವು ಇರಲಿಲ್ಲ.

೧೯೪೨ರ ಚಲೇಜಾವ್ ಚಳವಳಿಯಲ್ಲಿ ಶಿವಮೊಗ್ಗ ಜಿಲ್ಲೆಯ ಕೊಡುಗೆ ಅವಿಸ್ಮರಣೀಯವಾದುದು. ಉಳಿದ ಕಡೆಗಳಂತೆ ಇಲ್ಲಿಯೂ ಕೂಡ ನಾಯಕರೆಲ್ಲರೂ ಬಂಧಿಸಲ್ಪಟ್ಟಿದ್ದರಿಂದ ಅಥವಾ ಭೂಗತರಾಗಿದ್ದರಿಂದ ಚಳವಳಿ ಹಿಂಸಾತ್ಮಕ ರೂಪು ತಾಳಿತು. ಮೊದ

1 ಟಿಪ್ಪುಸುಲ್ತಾನನ ಪತನದ ನಂತರ (೧೭೯೯) ಕೆಲವೊಂದು ಅಸಂತುಷ್ಟ ನಾಯಕರು (ದಂಡಿಯಾ ವಾಘ, ಸ್ವಾಮಿ ಅಪರಾಂಪರ ಮತ್ತು ಇತರರು) ಮತ್ತೆ ಅಧಿಕಾರ ಕಳೆದುಕೊಂಡು ಅರಸರನ್ನು ತರಲು ಪ್ರಯತ್ನಿಸಿದರು. ೧೮೩೦ರಲ್ಲಿ ನಡೆದ ನಗರ (ಬಿದನೂರು) ದಂಗೆ, ರೈತರು ಅಧಿಕಾರಿಶಾಹಿಗಳ ವಿರುದ್ಧ ನಡೆಸಿದ ಒಂದು ಹೋರಾಟವಾಗಿದೆ.

2 ಕರ್ನಾಟಕ ಗೆಝೆಟಿಯರ್-ಶಿವಮೊಗ್ಗ ಜಿಲ್ಲೆ, ೧೯೭೫, ಪು. ೭೫

ಮೊದಲು ಚಳವಳಿ ನಗರ ಪ್ರದೇಶಗಳಿಗೆ ಸೀಮಿತವಾಗಿದ್ದು, ನಂತರ ಹಳ್ಳಿಗಳಿಗೂ ಹಬ್ಬಿತು. ಶಿಕಾರಿಪುರ ತಾಲೂಕಿನ ಇಸೂರ ಗ್ರಾಮದಲ್ಲಿ ಕೆಲವೊಂದು ಹಿಂಸಾತ್ಮಕ ಘಟನೆಗಳು ನಡೆದು, ರೊಚ್ಚಿಗೆದ್ದ ಗ್ರಾಮಸ್ಥರಿಂದ ಕೆಲವೊಂದು ಸರಕಾರಿಅಧಿಕಾರಿಗಳು ಕೊಲ್ಲಲ್ಪಟ್ಟರು. ಅತ್ಯಂತ ಉತ್ಸಾಹದಿಂದ ಚಳವಳಿಯಲ್ಲಿ ಭಾಗವಹಿಸಿದ ಇಸೂರಿನ ಯುವಕರು, ಗಾಂಧೀಜಿಯವರ ಕರೆಗಿಂತ ಸ್ವಲ್ಪ ಮುಂದೆ ಹೋಗಿ ಇಸೂರು 'ಸ್ವತಂತ್ರ ಹಳ್ಳಿ' ಯೆಂದು ಘೋಷಿಸಿದರು. ಆಗಸ್ಟ್, ೧೯೪೨ರಲ್ಲಿ ಊರಿನ ಪಟೇಲ, ಶ್ಯಾನಬೋಗರನ್ನು ಬಂಧಿಸಿ, ಅವರ ಕಾಗದ ಪತ್ರ ದಫ್ತರಗಳನ್ನು ವಶಪಡಿಸಿಕೊಂಡರು.

ಪರಿಸ್ಥಿತಿಯನ್ನು ಹತೋಟಿಗೆ ತರಲು ಕೆಲವೊಂದು ಅಧಿಕಾರಿಗಳು ಇಸೂರಿಗೆ ಭೇಟಿಕೊಟ್ಟು ಶಾಂತಿ ಸುವ್ಯವಸ್ಥೆ ಜಾರಿಗೆ ತರಲು ಪ್ರಯತ್ನ ನಡೆಸಿದರು. ಆದರೆ, ಇದಾವುದಕ್ಕೂ ಒಪ್ಪದ ಜನ ಗದ್ದಲವೆಬ್ಬಿಸಿದರು. ಅನಂತರ ನಡೆದ ಗೊಂದಲದಲ್ಲಿ ರೊಚ್ಚಿಗೆದ್ದ ಜನ ಅಮಲ್ದಾರ ಮತ್ತು ಪೊಲೀಸ್ ಸಬ್–ಇನ್ಸ್‌ಪೆಕ್ಟರನ್ನು ಕೊಂದರು. ಇದಕ್ಕೆ ಉತ್ತರವಾಗಿ ಸರಕಾರವು ದೊಡ್ಡ ಸಂಖ್ಯೆಯಲ್ಲಿ ಸೈನ್ಯವನ್ನು ಇಸೂರಿಗೆ ಕಳುಹಿಸಿ, ಮುಖಂಡರನ್ನು ಬಂಧಿಸಿ ಚಳವಳಿಯನ್ನು ಅಮಾನುಷವಾಗಿ ಹತ್ತಿಕ್ಕಿತು.

ಸೈನಿಕರು ಅನೇಕ ಜನರನ್ನು (ಮಹಿಳೆಯರನ್ನೂ ಕೂಡ) ಬಂಧಿಸಿ, ಸಾಗರ ಕೋರ್ಟಿಗೆ ಹಾಜರಪಡಿಸಲಾಯಿತು. ಸುಮಾರು ೪೧ ಜನರ ಮೇಲೆ ಖಟ್ಲೆ ನಡೆದು ೫ ಜನರಿಗೆ ಗಲ್ಲಿನ ಶಿಕ್ಷೆಯಾಗಿ, ಮಾರ್ಚ್ ೧೯೪೩ ರಲ್ಲಿ ಗಲ್ಲಿಗೇರಿಸಲಾಯಿತು. ಉಳಿದವರಿಗೆ ಹಲವು ಮಹಿಳೆಯರು ಸೇರಿದಂತೆ ಜೀವಾವಧಿ ಶಿಕ್ಷೆಯನ್ನು ವಿಧಿಸಲಾಯಿತು. ಒಟ್ಟಿನಲ್ಲಿ, ೧೯೪೨ರ ಚಳವಳಿಯಲ್ಲಿ ಎಲ್ಲಾ ಕಡೆ ಹಿಂಸೆಯಾದಂತೆ ಶಿವಮೊಗ್ಗ ಜಿಲ್ಲೆಯಲ್ಲಿ ಕೂಡ ಆಯಿತು. ಹಳ್ಳಿಯ ರೈತರು ಒಗ್ಗಟ್ಟಾಗಿ, ಸರಕಾರದ ವಿರುದ್ಧ ಮಾಡಿದ ಈ ಇಸೂರಿನ ಘಟನೆ ಒಂದು ಸ್ವತಂತ್ರ ಸಂಗ್ರಾಮದಲ್ಲಿ ಚೌರಿಚೌರಾದಂತೆ ಅವಿಸ್ಮರಣೀಯವಾದದ್ದು. ಇಸೂರಿನಲ್ಲಿ ನಡೆದ ಘಟನೆ ಉತ್ಸಾಹಿ ಯುವಕರು ಮಾಡಿದ ಆವೇಶದ ಘಟನೆಯಾಗಿದ್ದು, ಗಾಂಧೀಜಿಯವರ ಅಹಿಂಸೆ ತತ್ವವು ವಿಫಲವಾದುದೆಂದು ಹೇಳಲು ಬರುವಂತಿಲ್ಲ. ಅದು ಏನೇ ಇದ್ದರೂ, ಶಿವಮೊಗ್ಗ ಜಿಲ್ಲೆಯ ಜನತೆ ಈ ಘಟನೆಗಳಿಂದಾಗಿ, ರಾಜಕೀಯದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಮುಂದೆ ಬರುವ ಪ್ರಜಾಪ್ರಭುತ್ವದ ವ್ಯವಸ್ಥೆಗೆ ಪ್ರಬುದ್ಧರಾದರು.

**ಕಾಗೋಡ ಗೇಣಿದಾರರ ಚಳವಳಿ (೧೯೫೧):** ಸ್ವಾತಂತ್ರ್ಯ ದೊರೆತ ನಂತರದ ಭೂಸುಧಾರಣೆಗೆ ಸಂಬಂಧಿಸಿದ ಚಳವಳಿಗಳಲ್ಲಿ ಕಾಗೋಡಿನಲ್ಲಿ ನಡೆದ ಭೂಮಾಲೀಕರ ವಿರುದ್ಧ ನಡೆದ ಗೇಣಿದಾರರ ಚಳವಳಿ ಕರ್ನಾಟಕದಲ್ಲಿ ಮುಂದೆ ಬರುವ ಭೂಸುಧಾರಣೆ ಮೇಲೆ ಮಹತ್ವದ ಪಾತ್ರ ಬೀರಿತು. ಕಾಂಗ್ರೆಸ್ ತನ್ನ ಸ್ವಾತಂತ್ರ್ಯ ಹೋರಾಟದಲ್ಲಿ ಬ್ರಿಟಿಷರ ವಿರುದ್ಧ ಬಡರೈತರನ್ನು ಸೇರಿಸಿಕೊಳ್ಳಲು ಅನೇಕ ಭೂಸುಧಾರಣಾ ವಚನಗಳನ್ನು ಕೊಟ್ಟಿತ್ತು. ಆದರೆ ಸ್ವಾತಂತ್ರ್ಯದ ನಂತರದಲ್ಲಿ ವಚನ ಕೊಟ್ಟಂತೆ ಭೂಸುಧಾರಣೆ ತೀವ್ರಗತಿಯಲ್ಲಿ ಸಾಗಲಿಲ್ಲ. ಇದರಿಂದಾಗಿ, ಆಗತಾನೇ ಕಾಂಗ್ರೆಸ್ಸಿನಿಂದ ಸಿಡಿದು ಬಂದ ಸಮಾಜವಾದಿಗಳು, 'ಉಳುವವನಿಗೆ ಭೂಮಿ' ಎಂಬ ಪ್ರಣಾಳಿಕೆಯೊಂದಿಗೆ ರೈತರ ಚಳವಳಿಗಳನ್ನು ಬೆಂಬಲಿಸ ತೊಡಗಿದರು.

ಸಾಗರ ತಾಲೂಕಿನ ಕಾಗೋಡ ಗ್ರಾಮದಲ್ಲಿ ಗೌಡರ ಮನೆಯೊಂದೇ ಭೂ ಒಡೆತನ ಹೊಂದಿದ್ದು, ಉಳಿದ ಸುಮಾರು ೭೦ ಕುಟುಂಬಗಳು ಅವರ ಗೇಣಿದಾರಗರಾಗಿದ್ದರು. ತಲೆ ತಲಾಂತರದಿಂದ ಬಂದ ಈ ಪದ್ಧತಿಯನ್ನು, ಸ್ವತಂತ್ರವಾದ ನಂತರ ಕೆಲವೊಂದು ವಿದ್ಯಾವಂತ ಗೇಣಿದಾರ ಯುವಕರು ಪ್ರಶ್ನಿಸಿದ್ದರೂ ಯಾವುದೇ ಫಲ ದೊರೆತಿರಲಿಲ್ಲ. ಗೌಡರಿಗೂ ಗೇಣಿದಾರರಿಗೂ ಜಗಳ ಆರಂಭವಾದದ್ದು ಕೊಳಗ ಅಳತೆಯಲ್ಲಿ ಗೇಣಿದಾರರಿಗೆ ಆಗುತ್ತಿದ್ದ ಅನ್ಯಾಯದಲ್ಲಿ. ಗೇಣಿದಾರರೂ ಈ ಅನ್ಯಾಯವನ್ನು ಸರಿಪಡಿಸಿ ಎಂದು ಕೇಳಿದಾಗ ಗೌಡರ ಇದನ್ನು ತಮ್ಮ ಪ್ರತಿಷ್ಠೆಯ ವಿಷಯವಾಗಿ ತೆಗೆದುಕೊಂಡು ಗೇಣಿದಾರರನ್ನು ಸಂಪೂರ್ಣ ಒಕ್ಕಲೆಬ್ಬಿಸಲು ನೋಡಿದರು. ಆದರೆ ಈಗಾಗಲೇ ಕೆಲವೊಂದು ಬಾರಿ ಗೌಡರೊಂದಿಗೆ ವಿರಸಕ್ಕೆ ಇಳಿದು, ದೀವರ ಸಂಘಟನೆ ಮಾಡಿಕೊಂಡಿದ್ದ ಗಣಪತಿಯಪ್ಪ, ಒಕ್ಕಲೆಬ್ಬಿಸುವುದನ್ನು ವಿರೋಧಿಸಿ ಈ ಘಟನೆಯನ್ನು ಎಲ್ಲಾ ಕಡೆ

ಹರಡುವಂತೆ ಮಾಡಿದರು.[3] ಗೌಡರು ಅಷ್ಟಕ್ಕೆ ಬಿಡದೇ ಗೇಣಿದಾರರು ಎಲ್ಲಾ ಸಾಗುವಳಿಯನ್ನು ಬಿಡಬೇಕೆಂದು ಹಟ ಹಿಡಿದರು. ಮುಂದೆ ಈ ಜಗಳ ವಿಕೋಪಕ್ಕೆ ಹೋಗಿ, ಸಮಾಜವಾದಿಗಳ ಮತ್ತು ಕಾಂಗ್ರೆಸ್ಸಿಗರ ನಡುವೆ ನಡೆದ ಯುದ್ಧವಾಯಿತು.

ಸಮಾಜವಾದಿಗಳ ಮುಖಂಡರಾದ ರಾಮ ಮನೋಹರ ಲೋಹಿಯಾ, ಜಯಪ್ರಕಾಶ ನಾರಾಯಣ, ಶಾಂತವೇರಿ ಗೋಪಾಲಗೌಡ ಮುಂತಾದವರು ಕಾಗೋಡಿಗೆ ಭೇಟಿಕೊಟ್ಟು ಚಳವಳಿಯನ್ನು ಮುಂದು ವರೆಸಲು ಉತ್ತೇಜನ ಕೊಟ್ಟರು. ಆದರೆ ಚಳವಳಿ ಬಹಳ ದೀರ್ಘ ಕಾಲದವರೆಗೆ ಹೋಗತೊಡಗಿದ್ದರಿಂದ ಕಾಗೋಡಿನ ಒಕ್ಕಲುಗಳು ಅದರಲ್ಲಿ ಉತ್ಸಾಹ ಕಳೆದು ಕೊಂಡರು. ಕೋರ್ಟು, ಕಛೇರಿ, ಜಪ್ತಿಗಳಿಂದ ಅವರ ಬಲವೆಲ್ಲ ಉಡುಗಿಹೋಗಿ, ಸಾಗರ ಕೋರ್ಟಿಗೆ ತಿರು ಗಾಡುವಲ್ಲಿ ಎಲ್ಲವನ್ನೂ ಕಳೆದುಕೊಂಡರು. ಸಮಾಜ ವಾದಿ ಮುಖಂಡರು ಚಳವಳಿ ಮುಂದುವರೆಸಲು ಇಚ್ಛೆ ಯುಳ್ಳವರಾಗಿದ್ದರೆ ವಿನಾ ಯಾರಿಗೂ ನಡೆಸಿಕೊಂಡು ಹೋಗುವ ಸಾಮರ್ಥ್ಯವಿರಲಿಲ್ಲ.[4]

ಕಾಗೋಡ ಚಳವಳಿ ಗೇಣುದಾರರಿಗೆ ಯಾವುದೇ ಲಾಭ ತರದೇ ವಿಫಲವಾದರೂ ಮುಂದಿನ ಭೂ ಸುಧಾರಣೆ ಕಾನೂನುಗಳ ಮೇಲೆ ತನ್ನ ಪ್ರಭಾವವನ್ನು ಬೀರಿತು. ಮುಂದೆ ಬಂದ ೧೯೫೮, ೧೯೬೧ ಮತ್ತು ೧೯೭೪ರ ಭೂಸುಧಾರಣಾ ಕಾನೂನುಗಳು ಗೇಣಿದಾರ ರನ್ನು ಲಕ್ಷ್ಯದಲ್ಲಿಟ್ಟುಕೊಂಡು ಜಾರಿಗೆ ತರಲಾಯಿತು. ಅನಂತರ ಕರ್ನಾಟಕದಲ್ಲಿ ಗೇಣಿ ಪದ್ಧತಿ ಸಂಪೂರ್ಣವಾಗಿ ತೊಡೆದು ಹಾಕಿ ಉಳುವವನೇ ನೆಲದೊಡೆಯನಾದನು.

**ಭೂದಾನ ಚಳವಳಿ (೧೯೫೭–೫೮) :** ತೆಲಂಗಣ ಮತ್ತು ಇತರ ಹಿಂಸಾತ್ಮಕ ಚಳವಳಿಗಳು ಆಗದಂತೆ ತಡೆ ಯಲು, ೧೯೫೦ರ ದಶಕದಲ್ಲಿ ಆಚಾರ್ಯ ವಿನೋಬಾ ಭಾವೆಯವರು ಭೂ ಮತ್ತು ಗ್ರಾಮದಾನ ಚಳವಳಿ ಗಳನ್ನು ಆರಂಭಿಸಿದರು. ಶ್ರೀಮಂತ ರೈತರಲ್ಲಿ ಇದ್ದ ಭೂಮಿಯನ್ನು ಕಾಣಿಕೆಯ ರೂಪದಲ್ಲಿ ಪಡೆದು ಬಡರೈತ ರಲ್ಲಿ ಅದನ್ನು ಹಂಚುವುದೇ ಭೂದಾನ ಚಳವಳಿಯ ಧ್ಯೇಯ ವಾಗಿತ್ತು. ೧೯೫೭–೫೮ರಲ್ಲಿ ಕರ್ನಾಟಕಕ್ಕೆ ಭೇಟಿಯಿತ್ತು ಭಾವೆಯವರು ಶಿವಮೊಗ್ಗ ಜಿಲ್ಲೆಯಲ್ಲಿ ಹಲವು ಹಳ್ಳಿಗಳಲ್ಲಿ ಸಂಚರಿಸಿ, ಅನೇಕ ಎಕರೆ ಭೂಮಿಯನ್ನು ದಾನವಾಗಿ ಪಡೆದರು. ಸರ್ವೋದಯ ಮತ್ತು ಗಾಂಧಿಸ್ಮಾರಕ ನಿಧಿ ಸೇವಕರು ಇದರಲ್ಲಿ ಪಾಲ್ಗೊಂಡು ಪಾದಯಾತ್ರೆ ನಡೆಸಿ ದರು. ಶಿವಮೊಗ್ಗ ಜಿಲ್ಲೆಯ ಮಲ್ಲಿಕಾರ್ಜುನಪ್ಪ ಗೌಡರು ಅನೇಕ ಕಡೆ ಪಾದಯಾತ್ರೆ ಮಾಡಿ ಭೂದಾನ ಮತ್ತು ಗ್ರಾಮದಾನಗಳ ತತ್ವ ಪ್ರಚಾರ ಮಾಡಿದರು. ಶಿವಮೊಗ್ಗ ಜಿಲ್ಲೆಯ ಭೂದಾನದಲ್ಲಿ ಪಡೆದುಕೊಂಡ ಭೂಮಿಯ ಖಚಿತ ಅಂಕಿ–ಸಂಖ್ಯೆಗಳು ದೊರಕುತ್ತವೆ.[5]

ಯಶಸ್ಸಿನ ದೃಷ್ಟಿಯಿಂದ ಭೂದಾನ ಚಳವಳಿ ಅಷ್ಟೇನೂ ಸಫಲವಾಗಲಿಲ್ಲ. ಈ ದಾನಗಳಲ್ಲಿ ಬಹಳಷ್ಟು ಭಾವೆಯವರಿಗೆ ಕೊಟ್ಟ ಕೇವಲ ಬಾಯಿ ಮಾತಿನ ವಚನಗಳೆನಿಸಿದ್ದವು. ದಾನ ತೆಗೆದುಕೊಂಡ ಭೂಮಿ ಗಳನ್ನು ಯಾವುದೆಂದು ಗುರುತಿಸಿದಲ್ಲಿ ಕೆಲವೇ ಎಕರೆ ಭೂಮಿಯ ಸರ್ವೆ ನಂಬರುಗಳನ್ನು ಮಾತ್ರ ದಾಖಲಿಸ ಲಾಗಿತ್ತು. ಅನಂತರ ಬಂದ ಮುಂದಿನ ಪೀಳಿಗೆ ಯವರು ತಮ್ಮ ತಂದೆ, ಮುತ್ತಜ್ಜರು ಕೊಟ್ಟ ದಾನ ವನ್ನು ಕೊಡಲು ನಿರಾಕರಿಸಿದರು. ಇದರ ವಿಫಲತೆಗೆ ಸರಕಾರ ತೋರಿದ ನಿರ್ಲಕ್ಷ್ಯವೂ ಇನ್ನೊಂದು ಕಾರಣ ವಾಯಿತು.

**ಕಬ್ಬು ಬೆಳೆಗಾರರ ಸಂಘಟನೆ ಮತ್ತು ರೈತ ಸಂಘದ ಚಳವಳಿಗಳು :** ೧೯೭೦ರ ದಶಕದಲ್ಲಿ ಬಂದ

---

3 ವಿವರಗಳಿಗೆ: 'ಟೇನಸ್ಸಿ ರಿಲೇಶನ್ಸ್ ಇನ್ ಕರ್ನಾಟಕ, ಎ ಸ್ಟಡಿ ಆಫ್ ಕಾಗೋಡ್ ಟೆನಂಟ್ಸ್ ಎಜಿಟೇಶನ್, ಶಿವಮೊಗ್ಗ ಜಿಲ್ಲೆ, ೧೯೫೧', ಶಿವಮೊಗ್ಗದಲ್ಲಿ ೧೯೮೯ರಲ್ಲಿ ಕರ್ನಾಟಕ ಹಿಸ್ಟ್ರಿ ಕಾಂಗ್ರೆಸ್‌ನ ೮ನೆಯ ಸಮ್ಮೇಳನದಲ್ಲಿ ಮಂಡಿಸಿದ ನನ್ನ ಲೇಖನ–(ಅಪ್ರಕಟಿತ); ಜಿ. ರಾಜಶೇಖರ : ಕಾಗೋಡ ಸತ್ಯಾಗ್ರಹ, ೧೯೮೦, ಸಾಗರ ; ಗೋವಿಂದರಾವ್ : 'ದಿ ಕಾಗೋಡ ಸತ್ಯಾಗ್ರಹ' ಡೆಕ್ಕನ್ ಹೆರಾಲ್ಡ್, ೨೯–೧-೧೯೮೪

4 ಕಾಗೋಡ ಸತ್ಯಾಗ್ರಹ

5 ನೋಡಿ : ಕರ್ನಾಟಕ ಗೆಝೆಟಿಯರ್ — ಶಿವಮೊಗ್ಗ ಜಿಲ್ಲೆ, ಪು. ೩೯೫

'ಹಸಿರು ಕ್ರಾಂತಿ' ಭಾರತದ ರೈತರಲ್ಲಿ ಹೊಸದೊಂದು ವರ್ಗವನ್ನು ನಿರ್ಮಿಸಿತು. ನೀರಾವರಿ, ಉತ್ತಮ ಇಳವರಿ, ಕ್ರಿಮಿನಾಶಕ ಔಷಧಗಳು ಮತ್ತು ವಾಣಿಜ್ಯ ಬೆಳೆಗಳು ಬೇಸಾಯದಲ್ಲಿ ಉಪಯೋಗಿಸಿ, ಆರ್ಥಿಕವಾಗಿ ಬಲಿಷ್ಠವಾದ ಒಂದು ರೈತರ ಲಾಬಿ ಹುಟ್ಟಿತು. ಇದರಿಂದ ಆಹಾರದ ಉತ್ಪಾದನೆ ಹೆಚ್ಚಾಗಿ, ದೇಶವು ಆಹಾರ ಪದಾರ್ಥಗಳ ಆಮದು ನಿಲ್ಲಿಸಿತು. ಆದರೆ ಇದರಿಂದ ರೈತರಿಗೆ ಆದ ಲಾಭ ಅಷ್ಟಕಷ್ಟೆ. ಇವರು ಬೆಳೆದ ಬೆಳೆಗಳಿಗೆ ಮಾರುಕಟ್ಟೆಯಲ್ಲಿ ನಿಶ್ಚಿತ ಬೆಲೆ ಇಲ್ಲದೇ, ಕೆಲವೊಂದು ಬಾರಿ ಹಾನಿ ಆಗತೊಡಗಿತು. ಇದರಿಂದ ಹೆಚ್ಚು ಬಂಡವಾಳ ತೊಡಗಿಸಿ, ಆಧುನಿಕ ಸೌಲಭ್ಯಗಳೊಂದಿಗೆ ವ್ಯವಸಾಯದಲ್ಲಿ ತೊಡಗಿದ ಮಧ್ಯಮ ಮತ್ತು ಶ್ರೀಮಂತ ರೈತರಿಗೆ ಅತ್ಯಂತ ನಿರಾಶೆ ಕಾದಿತ್ತು.

ರಾಜಕೀಯ ಮತ್ತು ಆರ್ಥಿಕವಾಗಿ ಪ್ರಜ್ಞೆವುಳ್ಳ ಈ ರೈತ ಸಮುದಾಯಕ್ಕೆ ಸಂಘಟನೆ ರೂಪ ಕೊಡುವುದಕ್ಕೆ ಬಹಳ ಕಾಲ ಬೇಕಾಗಲಿಲ್ಲ. ಭಾರತದ ಅನೇಕ ರಾಜ್ಯಗಳಲ್ಲಿ ಈ ಮಧ್ಯಮ ಮತ್ತು ಶ್ರೀಮಂತ ವರ್ಗದ ರೈತರ ಹಿತವನ್ನು ಕಾಪಾಡಲು ಭಾರತದ ಅನೇಕ ರಾಜ್ಯಗಳಲ್ಲಿ ಅನೇಕ ರೈತ ಸಂಘಟನೆಗಳು ಹುಟ್ಟಿಕೊಂಡವು. ಕರ್ನಾಟಕದಲ್ಲಿ ಕೂಡ ಈ ದೃಷ್ಟಿಯಿಂದ ಅನೇಕ ಸಂಘಟನೆಗಳು ಹುಟ್ಟಿಕೊಂಡವು. ಅವುಗಳಲ್ಲಿ ಶಿವಮೊಗ್ಗ ಜಿಲ್ಲೆ ಕಬ್ಬು ಬೆಳೆಗಾರರ ಸಂಘ ಮುಂದೆ ಕರ್ನಾಟಕ ರಾಜ್ಯ ರೈತ ಸಂಘವಾಗಿ, ಕರ್ನಾಟಕ ರಾಜಕೀಯದಲ್ಲಿ ಒಂದು ಶಕ್ತಿಯಾಗಿ ಪರಿಣಮಿಸಿತು.

೧೯೭೦ರ ಕೊನೆಯಲ್ಲಿ ಶಿವಮೊಗ್ಗ ಕಬ್ಬು ಬೆಳೆಗಾರರ ಸಂಘವನ್ನು ಮಾಜಿ ಮಂತ್ರಿಗಳಾದ ಎಚ್.ಎಸ್. ರುದ್ರಪ್ಪನವರು ಸ್ಥಾಪಿಸಿದರು.[6] ರಾಜಕೀಯ ಪಕ್ಷಗಳಿಂದ ದೂರವಾದ ಈ ಸಂಘವು ಬಹು ಬೇಗನೆ ರೈತರನ್ನು ಆಕರ್ಷಿಸಿತು. ಅನಂತರ ಈ ಸಂಘಕ್ಕೆ ಪ್ರೊ॥ ಎಂ. ಡಿ. ನಂಜುಂಡಸ್ವಾಮಿ ಮತ್ತು ಸುಂದರೇಶ್ ಸೇರಿಕೊಂಡು ಬಲಪಡಿಸಿದರು.

ಈ ಸಂಘಕ್ಕೆ ಒಳ್ಳೆಯ ಅವಕಾಶ ಸಿಕ್ಕಿದ್ದು ಜುಲೈ ೧೯೮೦ರಲ್ಲಿ ನಡೆದ ಮಲಪ್ರಭಾ ರೈತ ದಂಗೆ. ದಂಗೆಗೂ ಈ ಸಂಘಕ್ಕೂ ಯಾವುದೇ ಸಂಬಂಧವಿರದೇ ಇದ್ದರೂ ಮಲಪ್ರಭಾ ದಂಗೆಯಲ್ಲಿ ಆದ ಹಿಂಸೆಯಿಂದ ರಾಜ್ಯದ ತುಂಬ ರೈತರ ಸಮಸ್ಯೆಗೆ ಹೊಸ ಆಯಾಮ ಸಿಕ್ಕಿ, ಸಣ್ಣ ಪುಟ್ಟ ರೈತ ಸಂಘಗಳು ರೈತರ ಪರ ವಾದಿಸಲು ಮುಂದೆ ಬಂದವು. ಈ ಸಂದರ್ಭವನ್ನು ಉಪಯೋಗಿಸಿಕೊಂಡು, ಶಿವಮೊಗ್ಗ ಕಬ್ಬು ಬೆಳೆಗಾರರ ಸಂಘ, ಕರ್ನಾಟಕ ರಾಜ್ಯ ರೈತ ಸಂಘವೆಂದು ಪುನರ್ ನೇಮಕ ಮಾಡಿ, ರಾಜ್ಯಾದ್ಯಂತ ರಾಸ್ತಾ-ರೋಕೊ ಚಳವಳಿಯನ್ನು ನಡೆಸಿತು. ಕೆಲವೇ ದಿನಗಳಲ್ಲಿ ರಾಜ್ಯದ ಎಲ್ಲಾ ಕಡೆ ಹಬ್ಬಿ, ಕರ್ನಾಟಕ ರಾಜ್ಯ ರೈತ ಸಂಘ ಮನೆ ಮಾತಾಯಿತು.

ಆರ್ಥಿಕವಾಗಿ ರೈತರ ಬೆಳೆಗಳಿಗೆ ತಕ್ಕ ಬೆಲೆ ಎಂಬ ಧ್ಯೇಯ ಮತ್ತು ರಾಜಕೀಯವಾಗಿ ರಾಜಕೀಯೇತರ ಶಕ್ತಿಯೆಂದು ಪ್ರಸಿದ್ಧಿಗೆ ಬಂದಿತು. ಆರ್ಥಿಕವಾಗಿ ತನ್ನ ಮೊದಲಿನ ತತ್ವಕ್ಕೆ ಗಂಟು ಬಿದ್ದರೂ ರಾಜಕೀಯವಾಗಿ ಪಕ್ಷೇತರವಾಗಿ ಉಳಿಯಲಿಲ್ಲ.[7] ಎಲ್ಲಾ ರೈತರು ಒಂದು ವರ್ಗ, ಸರಕಾರದ ನಗರ ಪಕ್ಷಪಾತತನವೇ ಹಳ್ಳಿಗಳ ಬಡತನಕ್ಕೆ ಕಾರಣ, ರೈತರ ಬೆಳೆಗಳಿಗೆ ಔದ್ಯಮಿಕ ವಸ್ತುಗಳ ರೀತಿ ಬೆಲೆ ಕೊಡುವವರೆಗೆ ಹೋರಾಟ–ಇವು ಇವರ ಬಲವಾದ ನಂಬುಗೆಗಳು.

---

6 ರುದ್ರಪ್ಪನವರು ೧೯೬೦ರ ದಶಕದಲ್ಲಿ ಎಸ್. ನಿಜಲಿಂಗಪ್ಪನವರ (೧೯೫೬-೫೮ ಮತ್ತು ೧೯೬೨-೬೮) ಮಂತ್ರಿಮಂಡಲದಲ್ಲಿ ಮಂತ್ರಿಯಾಗಿದ್ದರು. ಕೆಲಕಾಲದ ನಂತರ ಪಕ್ಷದ ರಾಜಕೀಯದಿಂದ ನಿವೃತ್ತರಾಗಿ, ಸಕ್ಕರೆ ಕಾರ್ಖಾನೆಗಳಲ್ಲಿ ರೈತರಿಗೆ ಆಗುತ್ತಿದ್ದ ಮೋಸ-ಅನ್ಯಾಯಗಳನ್ನು ಪ್ರತಿಭಟಿಸಿ, ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಪ್ರಯತ್ನಿಸಿದರು. ಆದರೆ ಸರಕಾರದಲ್ಲಿ ಭಾರಿ ಪ್ರಭಾವವಿದ್ದ ಸಕ್ಕರೆ ಕಾರ್ಖಾನೆ ಮಾಲಿಕರು, ಇವರು ಸಕ್ಕರೆ ಕಾರ್ಖಾನೆ ಸ್ಥಾಪಿಸದಂತೆ ಮಾಡಿದರು. ನಿರುಪಾಯವಾಗಿ ಅವರಿಗೆ ಪಾಠ ಕಲಿಸಲು ಈ ಸಂಘವನ್ನು ಸ್ಥಾಪಿಸಿದರು. ಹೆಚ್ಚಿನ ವಿವರಗಳಿಗೆ : ಎಂ.ವಿ. ನಾಡಕರ್ಣಿ: ಫಾರ್ಮರ್ಸ್ ಮೂವ್‌ಮೆಂಟ್ಸ್ ಇನ್ ಇಂಡಿಯಾ, ೧೯೮೭, ಅಹಮದಬಾದ್, ಪು. ೯೮.

7 ಉಳಿದ ರಾಜ್ಯಗಳಲ್ಲಿ ಕೂಡ ಅನೇಕ ಈ ತರಹದ ರೈತ-ಸಂಘಗಳು ರಾಜಕೀಯೇತರವಾಗಿ, ನಂತರ ಚುನಾವಣೆಗಳಲ್ಲಿ ಇಳಿದಿವೆ. ಉದಾ.: ತಮಿಳುನಾಡಿನಲ್ಲಿ ನಾರಾಯಣಸ್ವಾಮಿ ನಾಯ್ಡು, ಮಹಾರಾಷ್ಟ್ರದಲ್ಲಿ ಶರದ ಜೋಶಿ.

೧೯೮೩ರಲ್ಲಿ ನಡೆದ ವಿಧಾನಸಭಾ ಚುನಾವಣೆಯಲ್ಲಿ ಕರ್ನಾಟಕ ರಾಜ್ಯ ರೈತ ಸಂಘ, ಕಾಂಗ್ರೆಸ್ ವಿರುದ್ಧ ಕೆಲಸ ಮಾಡಿ, ಪ್ರಪ್ರಥಮ ಬಾರಿಗೆ ಕಾಂಗ್ರೆಸ್ ಪಕ್ಷ ಸೋಲಲು ಒಂದು ಬಲವಾದ ಕಾರಣವಾಯಿತು. ಆದರೆ ಮುಂದೆ ೧೯೮೫ರಲ್ಲಿ ಹೊಸ ಸರ್ಕಾರ ಇದು ಒಂದೇ ರೈತರ ಸಂಘವೆಂದು ಮಾನ್ಯತೆ ಮಾಡದಿದ್ದಾಗ ಮತ್ತೆ ಚಳವಳಿಯು ಹಾದಿ ಹಿಡಿಯಿತು. ಆದರೆ, ಚಳವಳಿ ಅಷ್ಟು ಯಶಸ್ವಿಯಾಗದೇ ಯಾವುದೇ ಲಾಭ ಪಡೆಯದೇ ಬಿಟ್ಟುಕೊಟ್ಟಿತು. ಮತ್ತೆ ಅನೇಕ ಚಳವಳಿಗಳನ್ನು ಮಾಡಿ, ಕೊನೆಗೆ ರಾಜಕೀಯ ಪ್ರವೇಶಿಸಿ, ತನ್ನದೇ ಆದ 'ಕನ್ನಡ ದೇಶ' ಎಂಬ ಪಕ್ಷವನ್ನು ೧೯೮೭ರ ಡಿಸೆಂಬರ್‌ನಲ್ಲಿ ಸ್ಥಾಪಿಸಲಾಯಿತು.

**ಉಪಸಂಹಾರ:** ಶಿವಮೊಗ್ಗ ಜಿಲ್ಲೆಯಲ್ಲಿ ನಡೆದ ರೈತ ಚಳವಳಿಗಳು ಕರ್ನಾಟಕದಲ್ಲಿ ರೈತರಿಗಿದ್ದ ರಾಜಕೀಯ ಮತ್ತು ಆರ್ಥಿಕ ಪ್ರಜ್ಞೆಯ ಮೇಲೆ ಬೆಳಕನ್ನು ಚೆಲ್ಲುತ್ತವೆ. ಈ ೫೦ ವರ್ಷಗಳ ಇತಿಹಾಸದಲ್ಲಿ ಕರ್ನಾಟಕದ ರೈತನು ಪ್ರೌಢನಾಗಿ ಬೆಳೆದ ಬಗ್ಗೆ ಕಾಲದಿಂದ ಕಾಲಕ್ಕೆ ಆದ ಈ ಚಳವಳಿಗಳು ತೋರಿಸುತ್ತವೆ. ಕೆಲವೊಂದು ಪ್ರದೇಶಗಳಲ್ಲಿ ಹಿಂಸಾತ್ಮಕ ಘಟನೆಗಳು ಜರುಗಿದರೂ ಆದರ ಪರಿಣಾಮಗಳಲ್ಲಿ ಮಾತ್ರ ಅಹಿಂಸಾತ್ಮಕದಲ್ಲಿ ಮುಕ್ತಾಯಗೊಂಡಿವೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ರೈತರಿಗೆ, ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವದ ಬಗ್ಗೆ ಮಾಹಿತಿ ಸಿಕ್ಕಿತು. ಕಾಗೋಡ ಸತ್ಯಾಗ್ರಹ ಭೂಸುಧಾರಣೆ ದಾರಿದೀಪವಾಯಿತು. ಕರ್ನಾಟಕ ರಾಜ್ಯ ರೈತ ಸಂಘದಿಂದ ರೈತರು ರಾಜಕೀಯವಾಗಿ ಬಲಿಷ್ಠವಾದ ಒಂದು ಲಾಬಿಯಾಗಿ ರೈತರ ಹಿತ ಕಡೆಗಣಿಸದಂತೆ ಸರ್ಕಾರಕ್ಕೆ ಅಂಕುಶವಾಯಿತು.*

---

* ಈ ಲೇಖನವನ್ನು ಬರೆಯುವಲ್ಲಿ ಸಹಾಯ ಮಾಡಿದ ನನ್ನ ಮಾರ್ಗದರ್ಶಕರಾದ ಡಾ॥ ಸಿ.ವಿ. ರಂಗಸ್ವಾಮಿಯವರಿಗೆ, ಈ ವಿಷಯಕ್ಕೆ ಸಂಬಂಧಿಸಿದಂತೆ ಕೆಲವೊಂದು ಮಹತ್ವದ ಮಾಹಿತಿಗಳನ್ನು ಒದಗಿಸಿದ ಡಾ॥ ಎಂ.ವಿ. ನಾಡಕರ್ಣಿ, ಇನ್‌ಸ್ಟಿಟ್ಯೂಟ್ ಆಫ್ ಸೋಶಿಯಲ್ ಆ್ಯಂಡ್ ಇಕಾನಮಿಕ್ ಚೇಂಜ್, ಬೆಂಗಳೂರು ಇವರಿಗೆ ಮತ್ತು ಇದರ ಡ್ರಾಫ್ಟನ್ನು ಓದಿ, ತಿದ್ದಿದ ಶ್ರೀ ಎಂ. ಜಿ. ಹೆಗಡೆ, ಇಂಗ್ಲೀಷ್ ಪ್ರಾಧ್ಯಾಪಕ, ಬಾಳಿಗಾ ಕಾಲೇಜು, ಕುಮಟಾ ಇವರಿಗೆ ನನ್ನ ಕೃತಜ್ಞತೆಗಳು.